# ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ : 1535
ಸದಸ್ಯರ ಹೆಸರು : ಶ್ರೀ ಪ್ರದೀಪ್ ಶೆಟ್ಟರ್
ಉತ್ತರಿಸುವ ದಿನಾಂಕ : 24-09-2021
ಉತ್ತರಿಸುವ ಸಚಿವರು : ಸಮಾಜ ಕಲ್ಯಾಣ ಮತ್ತು ಹಿಂದುಳಿದ ವರ್ಗಗಳ ಕಲ್ಯಾಣ ಸಚಿವರು.

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| ಅ) | 2018 ರಿಂದ 2021 ರವರೆಗೆ ಧಾರವಾಡ, ಗದಗ ಮತ್ತು ಹಾವೇರಿ ಜಿಲ್ಲೆಗಳಲ್ಲಿ ಪರಿಶಿಷ್ಟ ಜಾತಿ/ ಪರಿಶಿಷ್ಟ ಪಂಗಡಗಳು ವಾಸಿಸುವ ಕಾಲೋನಿಗಳ ಅಭಿವೃದ್ಧಿಗೆ ಎಷ್ಟು ಅನುದಾನವನ್ನು ನೀಡಲಾಗಿದೆ; | 2018-19 ರಿಂದ 2020-21ನೇ ಸಾಲಿನವರೆಗೆ ಪ್ರಗತಿ ಕಾಲೋನಿ ಯೋಜನೆಯಡಿ ಧಾರವಾಡ, ಗದಗ ಮತ್ತು ಹಾವೇರಿ ಜಿಲ್ಲೆಗಳ ವ್ಯಾಪ್ತಿಯಲ್ಲಿನ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದ ಕಾಲೋನಿಗಳಲ್ಲಿ ಮೂಲಭೂತ ಸೌಕರ್ಯಗಳನ್ನು ಒದಗಿಸಲು ಮಂಜೂರಾತಿ ನೀಡಿ ಬಿಡುಗಡೆ ಮಾಡಿರುವ ಅನುದಾನದ ವಿವರಗಳು ಈ ಕೆಳಕಂಡಂತಿದೆ. (ಕೋಷ್ಟಕಗಳು ಕೆಳಗೆ) |
| ಆ) | 2018 ರಿಂದ 2021 ರವರೆಗೆ ಸದರಿ ಜಿಲ್ಲೆಗಳಿಗೆ ಬಿಡುಗಡೆಯಾದ ಅನುದಾನದಲ್ಲಿ ಯಾವ ಯಾವ ರೀತಿಯ ಕಾಮಗಾರಿಗಳನ್ನು ಕೈಗೊಳ್ಳಲಾಗಿದೆ; | ಮೇಲ್ಕಂಡಂತೆ ಮಂಜೂರು ಮಾಡಿರುವ ಅನುದಾನಕ್ಕೆ ಅನುಗುಣವಾಗಿ ಆಯ್ಕೆ ಮಾಡಲಾಗಿರುವ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದ ಕಾಲೋನಿಗಳಲ್ಲಿ ಸಿ.ಸಿ.ರಸ್ತೆ ಮತ್ತು ಚರಂಡಿ ನಿರ್ಮಾಣ, ಅಂಗನವಾಡಿ ಕಟ್ಟಡ ನಿರ್ಮಾಣ, ಬೀದಿ ದೀಪಗಳ ಅಳವಡಿಕೆ, ಕುಡಿಯುವ ನೀರಿನ ಪೂರೈಕೆ ಇತ್ಯಾದಿ ಅಭಿವೃದ್ಧಿ ಕಾಮಗಾರಿಗಳನ್ನು ಕೈಗೊಳ್ಳಲಾಗಿರುತ್ತದೆ. |

**ಪರಿಶಿಷ್ಟ ಜಾತಿ:-** (ರೂ.ಲಕ್ಷಗಳಲ್ಲಿ)

| ಜಿಲ್ಲೆ | ಮಂಜೂರಾತಿ ಮೊತ್ತ | ಬಿಡುಗಡೆ ಮಾಡಿದ ಮೊತ್ತ |
|---|---|---|
| ಧಾರವಾಡ | 1455.00 | 874.50 |
| ಗದಗ | 1535.00 | 1111.50 |
| ಹಾವೇರಿ | 1566.00 | 795.65 |

**ಪರಿಶಿಷ್ಟ ಪಂಗಡ:-** (ರೂ.ಲಕ್ಷಗಳಲ್ಲಿ)

| ಜಿಲ್ಲೆ | ಮಂಜೂರಾತಿ ಮೊತ್ತ | ಬಿಡುಗಡೆ ಮಾಡಿದ ಮೊತ್ತ |
|---|---|---|
| ಧಾರವಾಡ | 215.00 | 215.00 |
| ಗದಗ | 465.00 | 345.00 |
| ಹಾವೇರಿ | 336.00 | 334.75 |



| | | |
|---|---|---|
| ಇ) | ಬಿಡುಗಡೆಯಾದ ಅನುದಾನವನ್ನು ಸಂಪೂರ್ಣವಾಗಿ ಕಾರ್ಯ ಯೋಜನೆಗೆ ತರಲು ವಿಫಲರಾದ ಅಧಿಕಾರಿಗಳ ವಿರುದ್ಧ ಯಾವ ರೀತಿಯ ಕ್ರಮ ಕೈಗೊಳ್ಳಲಾಗಿದೆ? | ಪ್ರಗತಿ ಕಾಲೋನಿ ಯೋಜನೆಯಡಿ ಪರಿಶಿಷ್ಟ ಜಾತಿ ಕಾಲೋನಿಗಳಲ್ಲಿ ಮೂಲಭೂತ ಸೌಲಭ್ಯಗಳನ್ನು ಒದಗಿಸಲು ಮಂಜೂರಾತಿ ನೀಡಿ, ಬಿಡುಗಡೆ ಮಾಡಲಾಗಿರುವ ಅನುದಾನಕ್ಕೆ ಅನುಗುಣವಾಗಿ ಸಂಬಂಧಪಟ್ಟ ಕ್ಷೇತ್ರದ ಶಾಸಕರುಗಳಿಂದ ಕಾಮಗಾರಿಗಳ ಪಟ್ಟಿಯನ್ನು ಪಡೆದು, ಜಿಲ್ಲಾಧಿಕಾರಿಗಳ ಅಧ್ಯಕ್ಷತೆಯಲ್ಲಿನ ಅನುಷ್ಠಾನ ಸಮಿತಿಯಿಂದ ಅನುಮೋದನೆ ನೀಡುವುದರೊಂದಿಗೆ, ಸರ್ಕಾರಿ ನಿರ್ಮಾಣ ಏಜೆನ್ಸಿಗಳ ಪತಿಯಿಂದ ಸಿದ್ಧಪಡಿಸಲಾದ ಅಂದಾಜು ಪಟ್ಟಿಗಳಿಗೆ ಜಿಲ್ಲಾಧಿಕಾರಿಗಳಿಗೆ ಪ್ರದತ್ತವಾಗಿರುವ ಆರ್ಥಿಕ ಅಧಿಕಾರದನ್ವಯ ಆಡಳಿತಾತ್ಮಕ ಅನುಮೋದನೆ ನೀಡಿ, ಕಾಮಗಾರಿಗಳನ್ನು ಕೈಗೊಳ್ಳಲಾಗಿರುತ್ತದೆ.<br><br>ಕಾಲೋನಿಗಳಲ್ಲಿ ಮೂಲಭೂತ ಸೌಕರ್ಯಗಳನ್ನು ಒದಗಿಸಲು ಬಿಡುಗಡೆಯಾದ ಅನುದಾನದಲ್ಲಿ ಕಾರ್ಯಕ್ರಮ ಅನುಷ್ಠಾನಗೊಳಿಸಲು ವಿಫಲರಾದ ಅಧಿಕಾರಿಗಳ ವಿರುದ್ಧ ಭೌತಿಕ ಮತ್ತು ಆರ್ಥಿಕ ದೂರುಗಳು ಸ್ವೀಕೃತವಾಗಿರುವುದಿಲ್ಲ. ದೂರುಗಳು ಸ್ವೀಕೃತವಾದಲ್ಲಿ ಪರಿಶೀಲಿಸಿ, ನಿಯಮಾನುಸಾರ ಕ್ರಮ ಕೈಗೊಳ್ಳಲಾಗುವುದು. |

ಸಕಇ 425 ಎಸ್‌ಎಲ್‌ಪಿ 2021

(ಕೋಟ ಶ್ರೀನಿವಾಸ ಪೂಜಾರಿ)
ಸಮಾಜ ಕಲ್ಯಾಣ ಹಾಗೂ
ಹಿಂದುಳಿದ ವರ್ಗಗಳ ಕಲ್ಯಾಣ ಸಚಿವರು